ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 08 ನೇ ಡಿಸೆಂಬರ್, 2020

ಎಂ.ಪಿ.ಎಂ. ಕಾರ್ಖಾನೆ ಪುನಃಶ್ಚೇತನಗೊಳಿಸುವ ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

24 (210) ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಮೈಸೂರು ಕಾಗದ ಕಾರ್ಖಾನೆ (ಎಂ.ಪಿ.ಎಂ.) ಭದ್ರಾವತಿ ಉದ್ಯಮವನ್ನು ಯಾವಾಗ ; ಎಲ್ಲಿ ಪ್ರಾರಂಭಿಸಲಾಯಿತು ; ಇದರ ಧ್ಯೇಯೋದ್ದೇಶಗಳೇನು ; (ವಿವರವಾದ ಮಾಹಿತಿ ನೀಡುವುದು)

(ಆ) ಈ ಕಂಪನಿಯಲ್ಲಿ ಪ್ರಾರಂಭದಿಂದ ಇಲ್ಲಿಯವರೆಗೂ ಸಿ.ಎಂ.ಡಿ.ಗಳು ಆಗಿ ಯಾರ್ಯಾರು ಕಾರ್ಯನಿರ್ವಹಿಸಿರುತ್ತಾರೆ ; (ಹೆಸರು ಮತ್ತು ಅವಧಿಯ ಮಾಹಿತಿ ನೀಡುವುದು)

(ಇ) ಕಂಪನಿಯ ಆರ್ಥಿಕ ಸ್ಥಿತಿಗತಿಯ (ಲಾಭ-ನಷ್ಟ) ಬಗ್ಗೆ ವರ್ಷಾವಾರು ಮಾಹಿತಿ ನೀಡುವುದು ;

(ಈ) ಕಂಪನಿಯ ನಷ್ಟಕ್ಕೆ ಕಾರಣಗಳೇನು ; (ವರ್ಷಾವಾರು ವಿವರ ನೀಡುವುದು)

(ಉ) ಈ ಕಂಪನಿಯ ಆಸ್ತಿಗಳು ಯಾವುವು ; ಹಾಗೂ ಅವು ಎಲ್ಲಿವೆ ; ಅವುಗಳ ಇಂದಿನ ಮೌಲ್ಯವೇನು ; ಇದರ ಮೇಲೆ ಸರ್ಕಾರದ ಹೊಣೆಗಾರಿಕೆ ಎಷ್ಟಿದೆ; (ವಿವರವಾದ ಮಾಹಿತಿ ನೀಡುವುದು)

(ಊ) ಅರಣ್ಯ ಇಲಾಖೆಯಿಂದ ಮೈಸೂರು ಕಾಗದ ಕಾರ್ಖಾನೆ (ಎಂ.ಪಿ.ಎಂ.) ಭದ್ರಾವತಿ ಇವರಿಗೆ ಕಚ್ಚಾ ಸಾಮಗ್ರಿ ತಯಾರಿಸುವ ಸಂಬಂಧ ಎಷ್ಟು ಅರಣ್ಯ ಭೂಮಿಯನ್ನು ನೀಡಲಾಗಿದೆ ; (ಗ್ರಾಮ, ಸರ್ವೆ ನಂ. ವಿಸ್ತೀರ್ಣ ಒಳಗೊಂಡಂತೆ ಮಾಹಿತಿ ನೀಡುವುದು)

(ಋ) ಸದರಿ ಜಮೀನಿನಲ್ಲಿ ಬೆಳೆದಿರುವ ಮರಗಳ ಮಾರಾಟದಿಂದ ಬರುವ ಹಣದಿಂದ ಮೈಸೂರು ಕಾಗದ ಕಾರ್ಖಾನೆ (ಎಂ.ಪಿ.ಎಂ.)ಯನ್ನು ಪುನಃಶ್ಚೇತನಗೊಳಿಸಲು ಸಾಧ್ಯವಿಲ್ಲವೆ ? (ವಿವರವಾದ ಮಾಹಿತಿ ನೀಡುವುದು)